

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 1089 |
| ಸದಸ್ಯರ ಹೆಸರು | ಶ್ರೀಮತಿ. ಎಸ್.ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 21.09.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕೊಡಗು ಜಿಲ್ಲೆಯಲ್ಲಿ ಎಂ-ಸ್ಯಾಂಡ್ ಘಟಕಗಳ ಕೊರತೆಯಿಂದಾಗಿ, ಬೇಡಿಕೆಗನುಗುಣವಾಗಿ ಸಾಮಗ್ರಿ ದೊರೆಯದೆ, ನಿರ್ಮಾಣ ಕಾಮಗಾರಿಗಳಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| (ಆ) | ಪ್ರಸ್ತುತ, ಜಿಲ್ಲೆಯಲ್ಲಿ ಎಷ್ಟು ಎಂ-ಸ್ಯಾಂಡ್ ಘಟಕಗಳು ಕಾರ್ಯನಿರ್ವಹಿಸುತ್ತಿವೆ; | ಪ್ರಸ್ತುತ ಕೊಡಗು ಜಿಲ್ಲೆಯಲ್ಲಿ 04 ಎಂ-ಸ್ಯಾಂಡ್ ಘಟಕಗಳು ಕಾರ್ಯನಿರ್ವಹಿಸುತ್ತಿದ್ದು, ಪ್ರತಿ ಮಾಹೆಯಾನ ಒಟ್ಟು 6250 ಮೆಟ್ರಿಕ್ ಟನ್ ಎಂ-ಸ್ಯಾಂಡ್ ಉತ್ಪಾದನೆ ಸಾಮರ್ಥ್ಯ ಹೊಂದಿರುತ್ತವೆ.<br>ಎಂ-ಸ್ಯಾಂಡ್ ಉತ್ಪಾದಿಸಲು ಸ್ಟೋನ್ ಕ್ರಷರ್ ಘಟಕ ಸ್ಥಾಪನೆಗೆ ಅನುಮತಿ ಕೋರಿ 03 ಅರ್ಜಿಗಳು ಸ್ವೀಕೃತವಾಗಿದ್ದು, ಲೈಸೆನ್ಸ್ ನೀಡುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |
| (ಇ) | ಎಂ-ಸ್ಯಾಂಡ್ ಘಟಕಗಳಿಂದ ನಿರ್ಮಾಣ ಕಾಮಗಾರಿಗಳಿಗೆ ಪ್ರತಿದಿನ ಲಭ್ಯವಾಗುತ್ತಿರುವ ಎಂ-ಸ್ಯಾಂಡ್ ಸಾಮಗ್ರಿ ಎಷ್ಟು; ಜಿಲ್ಲೆಯಲ್ಲಿನ ಬೇಡಿಕೆಗೆ ಅನುಗುಣವಾಗಿ ಎಂ-ಸ್ಯಾಂಡ್ ಸಾಮಗ್ರಿ, | ಕೊಡಗು ಜಿಲ್ಲೆಯಲ್ಲಿ ಎಂ-ಸ್ಯಾಂಡ್ ಉತ್ಪಾದನೆ ಮಾಡುವ 04 ಸ್ಟೋನ್ ಕ್ರಷರ್ ಘಟಕಗಳಿಂದ ಪ್ರತಿ ದಿನ ಅಂದಾಜು 150 ಮೆಟ್ರಿಕ್ ಟನ್ ಎಂ-ಸ್ಯಾಂಡ್ ನ್ನು ಉತ್ಪಾದಿಸಲಾಗುತ್ತಿದೆ. ಇದಲ್ಲದೆ ನೆರೆಯ ಜಿಲ್ಲೆಗಳಾದ |

| | | |
|---|---|---|
| | ಎಂ-ಸ್ಯಾಂಡ್ ಘಟಕಗಳಿಂದ ಉತ್ಪಾದನೆಯಾಗುತ್ತಿದೆಯೇ; | ಹಾಸನ, ಮೈಸೂರು, ಚಾಮರಾಜನಗರ ಮತ್ತು ಮಂಡ್ಯ ಜಿಲ್ಲೆಯಿಂದ ವಾರ್ಷಿಕ ಸುಮಾರು 1,02,185 ಮೆಟ್ರಿಕ್ ಟನ್ ಎಂ-ಸ್ಯಾಂಡ್ ಕೊಡಗು ಜಿಲ್ಲೆಗೆ ಪೂರೈಕೆಯಾಗುತ್ತಿದೆ. |
| (ಈ) | ಜಿಲ್ಲೆಯಲ್ಲಿನ ಬೇಡಿಕೆಗೆ ಅನುಗುಣವಾಗಿ ಎಂ-ಸ್ಯಾಂಡ್ ಸಾಮಗ್ರಿ, ಎಂ-ಸ್ಯಾಂಡ್ ಘಟಕಗಳಿಂದ ಉತ್ಪಾದನೆಯಾಗದಿದ್ದಲ್ಲಿ ನಿರ್ಮಾಣ ಕಾಮಗಾರಿಗಳಿಗೆ ತೊಂದರೆಯಾಗದಂತೆ ಸರ್ಕಾರ ಕೈಗೊಂಡಿರುವ ಕ್ರಮ ಏನು? | ಕೊಡಗು ಜಿಲ್ಲೆಯಲ್ಲಿ ನಡೆಯುವ ಸಾರ್ವಜನಿಕ ಮತ್ತು ಸರ್ಕಾರಿ ಕಾಮಗಾರಿಗಳಿಗೆ ಮರಳು ಪೂರೈಸುವ ಸಂಬಂಧ 17 ನದಿ ಮರಳು ಬ್ಲಾಕ್ ಗಳನ್ನು ಗುರುತಿಸಿ ಗುತ್ತಿಗೆ ಮಂಜೂರಾತಿ ನೀಡಲಾಗಿರುತ್ತದೆ. ಈ ಮರಳು ಬ್ಲಾಕುಗಳಿಂದ ವಾರ್ಷಿಕವಾಗಿ ಒಟ್ಟು 68650 ಮೆಟ್ರಿಕ್ ಟನ್ ಪ್ರಮಾಣದ ನದಿ ಮರಳನ್ನು ತೆಗೆಯಲು ರಾಜ್ಯ ಪರಿಸರ ಆಘಾತ ಅಂದಾಜೀಕರಣ ಪ್ರಾಧಿಕಾರದಿಂದ ವಾರ್ಷಿಕ ಮರಳು ಉತ್ಪಾದನೆಯನ್ನು ನಿಗಧಿಪಡಿಸಲಾಗಿದೆ.<br>ಕೊಡಗು ಜಿಲ್ಲೆಯಲ್ಲಿ ಎಂ-ಸ್ಯಾಂಡ್ ಉತ್ಪಾದನೆ ಮಾಡುವ 04 ಸ್ಟೋನ್ ಕ್ರಷರ್ ಘಟಕಗಳಿಂದ ಪ್ರತಿ ದಿನ ಅಂದಾಜು 150 ಮೆಟ್ರಿಕ್ ಟನ್ ಎಂ-ಸ್ಯಾಂಡ್ ನ್ನು ಉತ್ಪಾದನೆ ಮಾಡುತ್ತಿವೆ. ಇದಲ್ಲದೆ ನೆರೆಯ ಜಿಲ್ಲೆಗಳಾದ ಹಾಸನ, ಮೈಸೂರು, ಚಾಮರಾಜನಗರ ಮತ್ತು ಮಂಡ್ಯ ಜಿಲ್ಲೆಯಿಂದ ವಾರ್ಷಿಕ ಸುಮಾರು 1,02,185 ಮೆಟ್ರಿಕ್ ಟನ್ ಎಂ-ಸ್ಯಾಂಡ್ ಕೊಡಗು ಜಿಲ್ಲೆಗೆ ಪೂರೈಕೆಯಾಗುತ್ತಿದೆ.<br>ಎಂ-ಸ್ಯಾಂಡ್ ಉತ್ಪಾದಿಸಲು ಸ್ಟೋನ್ ಕ್ರಷರ್ ಘಟಕ ಸ್ಥಾಪನೆಗೆ ಅನುಮತಿ ಕೋರಿ 03 ಅರ್ಜಿಗಳು ಸ್ವೀಕೃತವಾಗಿದ್ದು, ಲೈಸೆನ್ಸ್ ನೀಡುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |

ಸಂಖ್ಯೆ ಸಿಐ 478 ಎಂಎಂಎನ್ 2021

Halappa A A

(ಆಚಾರ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂವಿಜ್ಞಾನ ಹಾಗೂ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು